# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1076(1144) |
| ಸದಸ್ಯರ ಹೆಸರು | ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ(ಸ್ಥಳಿಯ ಸಂಸ್ಥಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 17.03.2020 |
| ಉತ್ತರಿಸುವವರು | ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು |

| | ಪ್ರಶ್ನೆಗಳು | ಉತ್ತರ |
|---|---|---|
| ಅ. | ನಗರಸಭೆ ವ್ಯಾಪ್ತಿಯಲ್ಲಿ ಮನೆಗಳನ್ನು ಕಟ್ಟಲು ನಗರಸಭೆಯಲ್ಲಿ ಪರವಾನಿಗೆ ಪಡೆಯಲು ಇರುವ ಮಾನದಂಡಗಳೇನು; ಅರ್ಜಿಯನ್ನು ಸಲ್ಲಿಸಿದ ಎಷ್ಟು ದಿನಗಳಲ್ಲಿ ಪರವಾನಿಗೆ ಪತ್ರವನ್ನು ನೀಡಲಾಗುವುದು; | ನಾಗರೀಕರು/ಆರ್ಕಿಟೆಕ್ಟ್‌ಗಳು ಮನೆಗಳನ್ನು ಕಟ್ಟಲು Land and Building Plan Approval System (LBPAS)ತಂತ್ರಾಂಶದಲ್ಲಿ ಆನ್‌ಲೈನ್ ಮೂಲಕ ಕಟ್ಟಡ ಪರವಾನಿಗೆ ಅರ್ಜಿಯನ್ನು ಸಲ್ಲಿಸಬೇಕಿದ್ದು, ಅರ್ಜಿಯೊಂದಿಗೆ ಕಟ್ಟಡ ಉಪವಿಧಿ ಮತ್ತು ವಲಯವಾರು ನಿಯಮಾವಳಿ ಪ್ರಕಾರ ರಚಿಸಲಾದ ಕಟ್ಟಡ ನಕ್ಷೆ, ಮಾಲೀಕತ್ವ ಪುರಾವೆಯ ದಾಖಲೆ, ನಮೂನೆ-3, ಅಂದಾಜು ಪಟ್ಟಿ, ಗುರುತಿನ ಚೀಟಿ, ಮತ್ತು ಲೇಔಟ್ ನಕ್ಷೆ ದಾಖಲೆಗಳನ್ನು ಆನ್‌ಲೈನ್ ಮೂಲಕ ಸಲ್ಲಿಸಬೇಕಿರುತ್ತದೆ. ತಂತ್ರಾಂಶವು ಕಟ್ಟಡ ಉಪವಿಧಿ ಮತ್ತು ವಲಯವಾರು ನಿಯಮಾವಳಿ ಪ್ರಕಾರ ಕಟ್ಟಡ ನಕ್ಷೆಯನ್ನು ಸ್ವಯಂಚಾಲಿತವಾಗಿ ಪರಿಶೀಲಿಸಿ ವರದಿಯನ್ನು ನೀಡಲಿದ್ದು, ಸಕಾಲ ಅಧಿನಿಯಮದಡಿ ಕಟ್ಟಡ ಪರವಾನಿಗೆಯನ್ನು ನೀಡಲು 30 ದಿನಗಳನ್ನು ನಿಗಧಿಪಡಿಸಲಾಗಿರುತ್ತದೆ. |
| ಆ | ಇದರ ಕಾರ್ಯವಿಧಾನಗಳೇನು; ಆನ್‌ಲೈನ್ ಅರ್ಜಿಗಳನ್ನು ಸಲ್ಲಿಸಲು ಆಗುತ್ತಿರುವ ತೊಂದರೆಗಳ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶನಾಲಯವು ಟೆಂಡರ್ ಪ್ರಕ್ರಿಯೆ ಮೂಲಕ Land and Building Plan Approval System (LBPAS) ತಂತ್ರಾಂಶವನ್ನುIDSiಸಂಸ್ಥೆಯಿಂದ ಅಭಿವೃದ್ಧಿ ಪಡಿಸಿರುತ್ತದೆ.ದಿ:08-02-2018 ಮತ್ತು ದಿ:02-12-2019ರ ಅವಧಿಯಲ್ಲಿ LBPAS ತಂತ್ರಾಂಶವನ್ನು ವಿವಿಧ ಹಂತಗಳಲ್ಲಿ ರಾಜ್ಯದ ಎಲ್ಲಾ 276 ನಗರ ಸ್ಥಳೀಯ ಸಂಸ್ಥೆಗಳಲ್ಲಿ ಅನುಷ್ಠಾನಗೊಳಿಸಿ, LBPAS ತಂತ್ರಾಂಶದ ಮೂಲಕವೇ ಕಟ್ಟಡ ಪರವಾನಿಗೆ ಪ್ರಕ್ರಿಯೆಯನ್ನು ನಿರ್ವಹಿಸಲು ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಗೆ ಪೌರಾಡಳಿತ ನಿರ್ದೇಶನಾಲಯವು ಸೂಚಿಸಿರುತ್ತದೆ.<br><br>ಇತ್ತೀಚೆಗೆ ತಂತ್ರಾಂಶವನ್ನು ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಗೆ ವಿಸ್ತರಿಸಿರುವುದರಿಂದ ತಂತ್ರಾಂಶದಲ್ಲಿ ಬರುತ್ತಿರುವ ಕೆಲವೊಂದು ತಾಂತ್ರಿಕ ದೋಷಗಳನ್ನು ನಗರ ಸ್ಥಳೀಯ ಸಂಸ್ಥೆಗಳು ತಿಳಿಸುತ್ತಿದ್ದು, ಸದರಿ ದೋಷಗಳನ್ನು ನಿವಾರಣೆ ಮಾಡಲುIDSi ಸಂಸ್ಥೆಗೆ ಸೂಚಿಸಲಾಗುತ್ತಿದೆ. |

| | | |
|---|---|---|
| | | IDSi ಸಂಸ್ಥೆಯು ನಗರ ಸ್ಥಳೀಯ ಸಂಸ್ಥೆಗಳು ತಂತ್ರಾಂಶಕ್ಕೆ ಸಂಬಂಧಪಟ್ಟ ದೂರುಗಳನ್ನು ದಾಖಲಿಸಲು ಆನ್‌ಲೈನ್ ವ್ಯವಸ್ಥೆಯನ್ನು ಕಲ್ಪಿಸಿರುತ್ತದೆ ಮತ್ತು ಕರ್ನಾಟಕ ಮುನಿಸಿಪಲ್ ಡೇಟಾ ಸೊಸೈಟಿಯಲ್ಲಿ Support Deskಅನ್ನು ಸ್ಥಾಪಿಸಿರುತ್ತದೆ. ಇದುವರೆಗೆ ದಾಖಲಾದ 13254 ದೂರುಗಳಲ್ಲಿ 13061 ದೂರುಗಳನ್ನು ನಿವಾರಣೆ ಮಾಡಲಾಗಿದ್ದು, 193 ದೂರುಗಳನ್ನು ನಿವಾರಣೆ ಮಾಡಬೇಕಿರುತ್ತದೆ. |
| ಇ. | 2019-20ನೇ ಸಾಲಿನಲ್ಲಿ ಕೊಡಗು ಜಿಲ್ಲೆ, ಮಡಿಕೇರಿ ನಗರಸಭೆ ವತಿಯಿಂದ ಇಲ್ಲಿಯವರೆವಿಗೂ ನೀಡಿರುವ ಕಟ್ಟಡ ಪರವಾನಿಗೆಗಳ ಸಂಖ್ಯೆ ಎಷ್ಟು; ಅವುಗಳನ್ನು ಎಷ್ಟು ದಿನಗಳಲ್ಲಿ ನೀಡಲಾಗಿದೆ? (ವಿವರ ನೀಡುವುದು) | 2019-20ನೇ ಸಾಲಿನಲ್ಲಿ ಕೊಡಗು ಜಿಲ್ಲೆಯ ಮಡಿಕೇರಿ ನಗರಸಭೆಯು LBPAS ತಂತ್ರಾಂಶದ ಮೂಲಕ<br>• 58 ಕಟ್ಟಡ ಪರವಾನಿಗೆ ಕೋರಿ ಅರ್ಜಿಗಳನ್ನು ಸ್ವೀಕರಿಸಲಾಗಿರುತ್ತದೆ.<br>• 9 ಕಟ್ಟಡ ಪರವಾನಿಗೆಗಳನ್ನು ನೀಡಲಾಗಿರುತ್ತದೆ (ತಾಂತ್ರಿಕ ಸಮಸ್ಯೆಯಿಂದ 2 ಪರವಾನಿಗೆಗಳನ್ನು ನೀಡಲು 2 ತಿಂಗಳುಗಳನ್ನು ತೆಗೆದುಕೊಂಡಿದ್ದು, ಉಳಿದ 7 ಕಟ್ಟಡ ಪರವಾನಿಗೆಗಳನ್ನು ಒಂದು ತಿಂಗಳೊಳಗೆ ನೀಡಲಾಗಿರುತ್ತದೆ).<br>• 10 ಅರ್ಜಿಗಳಿಗೆ ಆನ್‌ಲೈನ್ ಮೂಲಕ ಹೆಚ್ಚಿನ ಮಾಹಿತಿ ಕೋರಿ ಹಿಂಬರಹ ನೀಡಿರುತ್ತದೆ<br>• 39 ಅರ್ಜಿಗಳು ನಗರಸಭೆಯ ವಿವಿಧ ಅಧಿಕಾರಿ/ಸಿಬ್ಬಂದಿಗಳ ಹಂತದಲ್ಲಿ ನಿರ್ವಹಣೆಗೆ ಬಾಕಿ ಉಳಿದಿರುತ್ತವೆ. |

ಸಂಖ್ಯೆ: ನಅಇ 48 ಜಿಇಎಲ್ 2020

(ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು